CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಮೇ ೬, ೨೦೦೪ (ವೈಶಾಖ ೧೬, ಶಕ ವರ್ಷ ೧೯೨೬) | ಸಂಚಿಕೆ ೧೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವ ಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 57 ಎಸ್‌ಇಎನ್ 2002, ಬೆಂಗಳೂರು, ದಿನಾಂಕ:21.05.2002.

2. ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ವರದಿ ದಿನಾಂಕ:03.03.2004.

**ಪ್ರಸ್ತಾವನೆ:**

ಶ್ರೀ ಎಂ. ಕೃಷ್ಣ, ವಿಶೇಷ ಜಿಲ್ಲಾಧಿಕಾರಿಗಳು, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ:21.05.2002ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಓದಲಾದ ದಿನಾಂಕ:03.03.2004ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವ ಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 57 ಎಸ್‌ಇಎನ್ 2002, ಬೆಂಗಳೂರು, ದಿನಾಂಕ:30ನೇ ಮಾರ್ಚ್, 2004**

ಸರ್ಕಾರವು ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 3 ಸೇಇವಿ 96, ದಿನಾಂಕ:24.04.1998ರನ್ವಯ 5,000-00 (ಐದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ಗೌರವ ಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 45 ಸೇಇವಿ 2001 ದಿನಾಂಕ:04.03.2002 ರನ್ವಯ 1,000-00 (ಒಂದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳು, ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "2052- ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01 ಕರ್ನಾಟಕ ಸರ್ಕಾರದ ಸಚಿವಾಲಯ 014 ಇತರೆ ಭತ್ಯೆಗಳು"ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್.427

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ:** ಎಸ್.ಎ. ಡಂಬಳ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಅವರ ವಿರುದ್ಧ ಇಲಾಖಾ ವಿಚಾರಣೆ-ರಾಜ್ಯ ಉಚ್ಛನ್ಯಾಯಾಲಯದ ಆದೇಶದಂತೆ ದಂಡನೆ ವಿಧಿಸಿದ ಆದೇಶವನ್ನು ಹಿಂದಕ್ಕೆ ಪಡೆದು ಮರು ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಕ್ರಮಾಂಕ:ಸಿಆಸುಇ 48 ಎಸ್‌ಇಎನ್ 95 ದಿನಾಂಕ:04.06.2002.

2. ಅರ್ಜಿ ಸಂಖ್ಯೆ:14:99ರಲ್ಲಿ ಕರ್ನಾಟಕ ಆಡಳಿತ ನ್ಯಾಯಮಂಡಲಿಯು ದಿನಾಂಕ:24.09.2002ರಲ್ಲಿ ನೀಡಿದ ಆದೇಶ.

3. ರಿಟ್ ಅರ್ಜಿ ಸಂಖ್ಯೆ:40899:2003ರಲ್ಲಿ ರಾಜ್ಯ ಉಚ್ಚ ನ್ಯಾಯಾಲಯವು ದಿನಾಂಕ:09.02.2004 ರಂದು ನೀಡಿದ ಆದೇಶ.

**ಪ್ರಸ್ತಾವನೆ:**

ವಿಶೇಷ ಭೂಸ್ವಾಧೀನ ಅಧಿಕಾರಿ ಕೃಷ್ಣ ಮೇಲ್ದಂಡೆ ಯೋಜನೆ, ಬಾಗಲಕೋಟೆ ಈ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಸರ್ಕಾರದ ನಿರ್ದೇಶನ:ಸುತ್ತೋಲೆಗಳು ಹಾಗೂ ಭೂಸ್ವಾಧೀನ ಕಾಯಿದೆಗಳನ್ನು ಉಲ್ಲಂಘಿಸಿ ನ್ಯಾಯಾಲಯದ ಮುಂದೆ ವಿಚಾರಣೆಯಲ್ಲಿದ್ದ ಪ್ರಕರಣಗಳಲ್ಲೂ ಅವಾರ್ಡ್ ತಯಾರಿಸಿದ, ಒಮ್ಮೆ ಪರಿಹಾರ ಧನ ವಿತರಣೆ ಆಗಿದ್ದ ಪ್ರಕರಣದಲ್ಲೂ ಅವಾರ್ಡ್ ತಯಾರಿಸಿದ, ಭೂ ಸ್ವಾಧೀನ ಪ್ರಕರಣಗಳ ವಹಿಯನ್ನು ನಿರ್ವಹಿಸದೇ ಪ್ರಕರಣಗಳು ನಿಷ್ಫಲಗೊಳ್ಳಲು ಕಾರಣರಾದ ಆರೋಪಕ್ಕಾಗಿ ಇತರರೊಡನೆ ಶ್ರೀ ಎಸ್. ಡಂಬಳ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧವೂ ಸಹ ಇಲಾಖಾ ವಿಚಾರಣೆ ನಡೆದು ಮೇಲೆ (1)ರಲ್ಲಿ ಓದಲಾದ ದಿನಾಂಕ:04.06.2002ರ ಸರ್ಕಾರಿ ಆದೇಶದಲ್ಲಿ ಅವರ ವೇತನವನ್ನು ಕೆಳಗಿನ ಹಂತಕ್ಕೆ ಇಳಿಸುವ ದಂಡನೆ ವಿಧಿಸಲಾಯಿತು. ತಮ್ಮ ವಿರುದ್ಧ ಇಲಾಖಾ ವಿಚಾರಣೆ ಹೂಡಿದ ಕ್ರಮವನ್ನು ಪ್ರಶ್ನಿಸಿ ಎಸ್.ಎ. ಡಂಬಳ್, ಕೆ.ಎ.ಎಸ್. ಅಧಿಕಾರಿ ಅವರು ಸಲ್ಲಿಸಿದ ಅರ್ಜಿ ಸಂಖ್ಯೆ 14:99ನ್ನು ಪರಿಶೀಲಿಸಿದ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಮೇಲೆ (2)ರಲ್ಲಿ ಓದಲಾದ ದಿನಾಂಕ:24.09.2002ರ ಆದೇಶ ಹೊರಡಿಸಿ ಸಿಸಿಎ ನಿಯಮ 11ರ ವಿಧಿ ವಿಧಾನಗಳನ್ನು ಪಾಲಿಸದೇ ಹಾಗೂ ದಾಖಲೆಗಳೇ ಇಲ್ಲದೇ ವಿಚಾರಣೆ ನಡೆದಿದೆ ಎಂಬ ನಿಲುವು ಕಳೆದು ಮರು ವಿಚಾರಣೆ ನಡೆಸುವ ಅಧಿಕಾರವನ್ನೂ ಸಹ ಸರ್ಕಾರಕ್ಕೆ ನೀಡದೇ ದಂಡನೆ ವಿಧಿಸಿದ ಆದೇಶವನ್ನು ರದ್ದುಪಡಿಸಿತು. ಆದರೆ ಪ್ರಕರಣದಲ್ಲಿ ದಾಖಲೆಗಳು ಇದ್ದವು. ಲೋಪ ಕಂಡು ಬಂದ ಹಂತದಿಂದ ವಿಚಾರಣೆ ನಡೆಸಲು ಅವಕಾಶ ನೀಡಿದ ಮಂಡಳಿಯ ದಿನಾಂಕ:24.09.2002ರ ಆದೇಶವನ್ನು ಪ್ರಶ್ನಿಸಿ ಸರ್ಕಾರದ ವತಿಯಿಂದ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:40889:2003ನ್ನು ಸಲ್ಲಿಸಲಾಯಿತು. ರಾಜ್ಯ ಉಚ್ಚ ನ್ಯಾಯಾಲಯವು ಮೇಲೆ (3)ರಲ್ಲಿ ಓದಲಾದ ದಿನಾಂಕ:09.02.2004ರ ಆದೇಶದಲ್ಲಿ ಲೋಪ ಕಂಡು ಬಂದ ಹಂತದಿಂದ ಮತ್ತೆ ವಿಚಾರಣೆಯನ್ನು ನಡೆಸಲು ಅಧಿಕಾರ ನೀಡಿದೆ. ಕೆ.ಎ.ಟಿ. ಹಾಗೂ ಉಚ್ಚ ನ್ಯಾಯಾಲಯದ ಆದೇಶಗಳನ್ನು ಅನುಷ್ಠಾನಗೊಳಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 19 ಎಸ್‌ಇಎನ್ 99, ಬೆಂಗಳೂರು, ದಿನಾಂಕ:30ನೇ ಮಾರ್ಚ್, 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸನ್ನಿವೇಶಗಳಿಂದಾಗಿ ಕರ್ನಾಟಕ ಆಡಳಿತ ನ್ಯಾಯ ಮಂಡಲಿ ಹಾಗೂ ರಾಜ್ಯ ಉಚ್ಚ ನ್ಯಾಯಾಲಯದ ಆದೇಶಗಳನ್ನು ಅನುಷ್ಠಾನಗೊಳಿಸಿದ ಸರ್ಕಾರವು ಶ್ರೀ ಎಸ್.ಎ. ಡಂಬಳ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೆ ದಂಡನೆ ವಿಧಿಸಿದ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಎಸ್‌ಇಎನ್ 95, ದಿನಾಂಕ:04.06.2002ನ್ನು ರದ್ದುಪಡಿಸುತ್ತದೆ. ಈ ಆದೇಶವನ್ನು ಹೊರಡಿಸದಿದ್ದಲ್ಲಿ ಅಧಿಕಾರಿಯು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ವಿಭಾಗಾಧಿಕಾರಿಗಳ ಹುದ್ದೆಯನ್ನು ರದ್ದುಪಡಿಸಿರುವುದರಿಂದ ಬೆಳಗಾವಿ ವಿಭಾಗಾಧಿಕಾರಿ ಹಾಗೂ ಅವರ ರಾಜ್ಯ ಪತ್ರಾಂಕಿತ ಸಹಾಯಕರ ಹುದ್ದೆಗಳು ಅಸ್ಥಿತ್ವದಲ್ಲಿಲ್ಲ. ಆದ್ದರಿಂದ ಉಚ್ಚ ನ್ಯಾಯಾಲಯದ ಆದೇಶದಂತೆ ಶ್ರೀ ಎಸ್.ಎ. ಡಂಬಳ್, ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ, ಕಾರವಾರ ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ವಿಶೇಷ ಜಿಲ್ಲಾಧಿಕಾರಿ, ಭೂಸ್ವಾಧೀನ, ಪುನರ್‌ವಸತಿ ಮತ್ತು ಪುನರ್ ನಿರ್ಮಾಣ ಬೃಹತ್ ನೀರಾವರಿ ಯೋಜನೆಗಳು ಬೆಳಗಾವಿ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್.429

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## FOREST, ECOLOGY AND ENVIRONMENT SECRETARIAT

**Sub:** Renewal of lease of 0.40 ha of forest land in Ft.Sy. No.285 of Achwe Village in Honnavar Division in favour of Mahila Mandal, Achwe.

**Read:**
1. Government Order No.FFD 211 FGL 85, Dated:14.09.1990.
2. Letter No.A5(2) GFL.CR-3/2002-03, Dated:31.08.2002 of Principal Chief Conservator of Forests, Bangalore.
3. State Government letter No.FEE 307 FGL 2002, Dated:11.11.2002.
4. Letter No.F(C)A/11.1/89/KAR/1970 Dated:30.12.2002. of Ministry of Environment and Forests, Government of India, Regional Office (S.Z) Bangalore.

**Preamble:**

Government accorded sanction to permit the then Chief Conservator of Forests (General), Bangalore, for diversion of 0.40 ha. of forest land out of Ft.Sy.No.285 of Achwe Village, Ankola Taluk in U.K. District for regularization of encroachment done by Mahila Mandal, Achwe subject to certain conditions and the lease period was 5 years vide G.O. Dated:14.09.1990 read at (1) above.

The Principal Chief Conservator of Forests, Bangalore vide his letter dated:31.08.2002 read at (2) above has sent a renewal proposal to State Government stating that the lease was sanctioned earlier vide G.O. dated:14.09.1990 for a period of 5 years which expired on 14.09.1995 and requested to move the matter with Government of India to obtain the approval for renewal of 0.40 ha. of forest land in Achwe in favour of Mahila Mandal, Achwe, subject to certain conditions.

Accordingly, the proposal was recommended to Government of India for renewal of lease of 0.40 ha. of forest land in Ft.Sy.No.285 of Achwe Village in Honnavar Division in favour of Mahila Mandal, Achwe vide letter dated:11.11.2002 read at (3) above.

The Government of India, Ministry of Environment and Forests, Regional Office, (South Zone), Bangalore vide its letter Dated:30.12.2002 read at (4) above has stated that the approval conveyed under Section 2 of Forest (Conservation) Act, 1980 by the Central Government in this case, holds good for perpetuity. Since lease period of 5 years is stipulated by State Government, extension may also be given by State Government itself.

The proposal has been examined in detail and the following orders are issued:

**Government Order No. FEE 307 FGL 2002, Bangalore, Dated:27th March, 2004**

In the circumstances explained above in the preamble, Government are pleased to accord approval for renewal of lease of 0.40 ha. of forest land in Ft.Sy.No.285 of Achwe Village in Honnavar Division in favour of Mahila Mandal, Achwe for a further period of 15 years with effect from 14.09.1995 subject to the following terms and conditions:

1. The legal status of forest land will continue to be forest land.
2. The total forest area utilised for the project shall not exceed 0.40 ha. and it should be used only for the purpose for which it is granted. In case the land is not used for the stipulated purpose or when it no longer needed for the stipulated purpose the area should automatically revert back to the Forest Department.
3. The lessee has to pay the lease rent as fixed by the Government from time to time.
4. The user agency shall pay the cost of raising compensatory afforestation in an area of 0.80 ha. of degraded forest land at the rate prevailing at the time of approval. (Now it is Rs. 54,200/- per ha.).
5. The period of lease shall be for 15 years w.e.f. 14.09.1995.
6. The user agency has to pay the Net Present Value of the forest land as fixed by Government vide Notification No.FEE 247 FGL 2002, dated:17.01.2004.
7. Any other conditions to be stipulated by Government of India/State Government/Principal Chief Conservator of Forests, in the interest of Conservation of Forests.

By Order and in the name of the Governor of Karnataka,

**S.R. VATSALA**

PR-430

Under Secretary to Government,
Forest, Ecology and Environment Department.

**ಕಾನೂನು ಸಚಿವಾಲಯ**

**ವಿಷಯ:** ಶ್ರೀ ಕೆ.ಬಿ. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಗದಗ್ (ಹಿಂದಿನ ಸಹಾಯಕ ಅಭಿಯೋಗ ನಿರ್ದೇಶಕರು, ಕೆ.ಜಿ.ಎಫ್) ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾ ಪ್ರಾಧಿಕಾರಿ ಹಾಗೂ ಅಭಿಯೋಕ್ತಧಿಕಾರಿಯಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಲಾ 238 ಪಿಪಿಇ 01, ದಿನಾಂಕ:28.10.03.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಪಿಎನ್:ಕೇಂಸ:ಬಿ -52:2000-01, ದಿನಾಂಕ:31.01.2004.
3. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 3 ಸೇಇವಿ 98, ದಿನಾಂಕ:24.04.98.

**ಪ್ರಸ್ತಾವನೆ:**

ಶ್ರೀ ಕೆ.ಬಿ. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಗದಗ ರವರು ಈ ಹಿಂದೆ ಕೆ.ಜಿ.ಎಫ್‌ನಲ್ಲಿ ಸಹಾಯಕ ಅಭಿಯೋಗ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕೆ.ಜಿ.ಎಫ್. ಅಡಿಷನಲ್ ಜೆಎಂಎಫ್‌ಸಿ ನ್ಯಾಯಾಲಯದ ಪ್ರಭಾರ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರ ಮೇಲೆ ಲಂಚಗುಳಿತನ, ಸ್ವಜನ ಪಕ್ಷಪಾತ, ಜಾತೀಯತೆ, ಕರ್ತವ್ಯ ಭ್ರಷ್ಟತೆ ಮುಂತಾದ ದೂರುಗಳು ಬಂದ ಹಿನ್ನೆಲೆಯಲ್ಲಿ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀಯುತ ಹೆಚ್. ಸತ್ಯನಾರಾಯಣ ಶೆಟ್ಟಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹುಬ್ಬಳ್ಳಿ ಇವರನ್ನು ವಿಚಾರಣಾ ಪ್ರಾಧಿಕಾರಿಯಾಗಿ ಮತ್ತು ಸರ್ಕಾರಿ ಅಭಿಯೋಜಕರು ಗದಗ ಇವರನ್ನು ಮಂಡನಾಧಿಕಾರಿಯಾಗಿ ಮೇಲೆ ಓದಲಾದ 1ರ ಆದೇಶದಲ್ಲಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ(1)ರ ಆದೇಶವನ್ನು ನೊಂದಾಯಿತ ಅಂಚೆ ಮೂಲಕ ವಿಚಾರಣಾಧಿಕಾರಿಯವರಿಗೆ ಕಳುಹಿಸಿಕೊಡಲಾಗಿದ್ದು, ವಿಚಾರಣಾಧಿಕಾರಿಯವರು ಅದರ ವಿಳಾಸಿದ ಸ್ಥಳದಲ್ಲಿ ಇರುವುದಿಲ್ಲವೆಂದು ನೊಂದಾಯಿತ ಅಂಚೆ ಮೂಲಕ ಕಳುಹಿಸಲಾಗಿದ್ದ ಲಕೋಟೆ ವಾಪಾಸ್ ಬಂದಿರುತ್ತೆ ಎಂದು ಮೇಲೆ ಓದಲಾದ ಕ್ರಮಾಂಕ 2ರಲ್ಲಿ ಅಭಿಯೋಗ ನಿರ್ದೇಶಕರು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ನೇಮಿಸಲಾಗಿದ್ದ ವಿಚಾರಣಾಧಿಕಾರಿಯವರನ್ನು ಬದಲಾಯಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 238 ಪಿಪಿಇ 2001, ಬೆಂಗಳೂರು, ದಿನಾಂಕ:29ನೇ ಮಾರ್ಚ್, 2004**

ಶ್ರೀ ಕೆ.ಬಿ. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಗದಗ್ (ಹಿಂದಿನ ಸಹಾಯಕ ಅಭಿಯೋಗ ನಿರ್ದೇಶಕರು ಕೆ.ಜಿ.ಎಫ್) ಇವರ ವಿರುದ್ಧದ ಆಪಾದನೆಗಳ ಬಗ್ಗೆ ಕೆಸಿಎಸ್ (ಸಿಸಿಎ) ನಿಯಮಾವಳಿ 1957ರ ನಿಯಮ 11ರ ಉಪ ನಿಯಮ (2)ರನ್ವಯ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆಯ ಇಲಾಖೆಯ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.04.98ರನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಸದರಿ ನಿಯಮಾವಳಿ ನಿಯಮ 11 ಮತ್ತು 11(ಎ) ರನ್ವಯ ಪ್ರತಿ ಪ್ರಕರಣಕ್ಕೆ ರೂ. 5,000-00 (ರೂಪಾಯಿ ಐದು ಸಾವಿರ ಮಾತ್ರ)ಗಳ ಸಂಚಿತ ಸಂಭಾವನೆ ಹಾಗೂ ಪ್ರತಿ ಪ್ರಕರಣಕ್ಕೆ ರೂ. 1000-00 (ಒಂದು ಸಾವಿರ ರೂ. ಮಾತ್ರ) ವಾಹನ ಭತ್ಯೆ ನೀಡುವ ಆಧಾರದ ಮೇಲೆ ಶ್ರೀಯುತ ಟಿ. ಸಂತಾನಮ್, ನಂ 212, 1ನೇ ಬ್ಲಾಕ್ 3ನೇ ಕ್ರಾಸ್, ಜಯನಗರ ಬೆಂಗಳೂರು-560011 ಇವರನ್ನು ವಿಚಾರಣಾ ಪ್ರಾಧಿಕಾರಿಯಾಗಿ ಕೆಳಕಂಡ ಷರತ್ತುಗಳೊಂದಿಗೆ ನೇಮಿಸಿದೆ. ಮಂಡನಾಧಿಕಾರಿ ನೇಮಕದ ಬಗ್ಗೆ ಯಾವುದೇ ಬದಲಾವಣೆಯಿಲ್ಲ.

**ಷರತ್ತುಗಳು:**

1. ಪ್ರಕರಣದ ವಿಚಾರಣೆಯನ್ನು ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಕಾರ್ಯಾಲಯದಲ್ಲಿ ನಡೆಸತಕ್ಕದ್ದು.
2. ವಿಚಾರಣಾ ಪ್ರಾಧಿಕಾರಿಯವರಿಗೆ ಇಲಾಖಾ ವಿಚಾರಣೆ ಮುಕ್ತಾಯವಾಗುವವರೆಗೆ ಅಭಿಯೋಗ ನಿರ್ದೇಶಕರು ರವರು ತಮ್ಮ ಕಛೇರಿಯ ಬೆರಳಚ್ಚುಗಾರರು: ಶೀ ಲಿ. ಗಾರರ ಸೇವೆಯನ್ನು ಒದಗಿಸುವುದರ ಜೊತೆಗೆ ಅಗತ್ಯ ಲೇಖನ ಸಾಮಗ್ರಿಗಳನ್ನು ಸಹ ಒದಗಿಸತಕ್ಕದ್ದು.
3. ಇಲಾಖಾ ವಿಚಾರಣೆಯನ್ನು ಎರಡು ತಿಂಗಳೊಳಗೆ ಪೂರೈಸಿ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸತಕ್ಕದ್ದು.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರು ರೂ. 5,000-00 ಸಂಚಿತ ಸಂಭಾವನೆಯನ್ನು ಮತ್ತು ರೂ. 1000-00 ವಾಹನ ಭತ್ಯೆಯನ್ನು ವಿಚಾರಣಾ ಪ್ರಾಧಿಕಾರಿಯವರಿಗೆ ಅವರು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಪಾವತಿಸತಕ್ಕದ್ದು.
5. ಈ ಸಂಬಂಧ ತಗಲುವ ವೆಚ್ಚವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 2003-04ನೇ ಸಾಲಿನ ಆಯವ್ಯಯದಲ್ಲಿ ಕಛೇರಿ ವೇತನ ಲೆಕ್ಕ ಶೀರ್ಷಿಕೆಯಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಹೆಚ್. ನಾಗೇಂದ್ರಪ್ಪ**

ಪಿ.ಆರ್.444 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಶ್ರೀ ಟಿ.ಸಿ. ವರದೇಗೌಡ, ಹಿಂದಿನ ಕೈಗಾರಿಕಾ ವಿಸ್ತರಣಾಧಿಕಾರಿ, ತಾಲ್ಲೂಕು ಕೈಗಾರಿಕಾ ಕೇಂದ್ರ ಮೈಸೂರು, ಹಾಲಿ ಕೈಗಾರಿಕಾ ವಿಸ್ತರಣಾಧಿಕಾರಿ, ತಾಲ್ಲೂಕು ಕೈಗಾರಿಕಾ ಕೇಂದ್ರ, ನಂಜನಗೂಡು, ಇವರ ವಿರುದ್ಧದ ಟ್ರಾಪ್ ಕೇಸ್ ಕುರಿತು ಇಲಾಖಾ ವಿಚಾರಣೆ-ದೋಷಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಸಮಸಂಖ್ಯೆಯ ಆದೇಶ ದಿನಾಂಕ:14.06.2002.

2. ಮಾನ್ಯ ಲೋಕಾಯುಕ್ತರ ಅರೆ ಸರ್ಕಾರಿ ಪತ್ರ ಸಂಖ್ಯೆ: ಲೋಕ/ಎಆರ್‌ಇ-3/ಇಎನ್‌ಕ್ಯೂ-63/2002-03, ದಿನಾಂಕ:01.12.2003.

**ಪ್ರಸ್ತಾವನೆ:**

ಶ್ರೀ ಟಿ.ಸಿ. ವರದೇಗೌಡ, ಕೈಗಾರಿಕಾ ವಿಸ್ತರಣಾಧಿಕಾರಿ, ಇವರು ಹಿಂದೆ ಮೈಸೂರು ತಾಲ್ಲೂಕು ಕೈಗಾರಿಕಾ ಕೇಂದ್ರದಲ್ಲಿ ಕೆಲಸ ಮಾಡುತ್ತಿದ್ದಾಗ ಅಗರಬತ್ತಿ ಫ್ಯಾಕ್ಟರಿ ನೋಂದಣಿ ಮಾಡಲು ತಾತ್ಕಾಲಿಕ ನೋಂದಣಿ ಪತ್ರ ನೀಡುವ ಸಲುವಾಗಿ ಮೈಸೂರಿನ ರಾಜೇಂದ್ರನಗರದ ನಿವಾಸಿಯಾದ ಶ್ರೀ ಬಚ್ಚಣ್ಣೇಗೌಡ ಬಿನ್ ಲೇಟ್ ಹುಚ್ಚಯ್ಯ, ಎಂಬುವರಿಂದ ದಿನಾಂಕ:26.07.1997ರಂದು ರೂ. 200.00 ಗಳನ್ನು ಲಂಚವನ್ನು ಕೇಳಿ ಪಡೆದುಕೊಂಡ ಸಮಯದಲ್ಲಿ ಮೈಸೂರು ಲೋಕಾಯುಕ್ತ ಅಧಿಕಾರಿಗಳ ಬಲೆಗೆ ಸಿಕ್ಕಿಕೊಂಡಿದ್ದಾರೆಂದು, ಆಪಾದಿತರು ಲಂಚವನ್ನು ಒತ್ತಾಯಿಸಿ ಪಡೆದುಕೊಂಡಿರುವುದನ್ನು ಸಾಬೀತುಗೊಳಿಸಲು ಮೇಲ್ನೋಟಕ್ಕೆ ಸಾಕಷ್ಟು ಆಧಾರಗಳಿರುವುದರಿಂದ ಕಠಿಣ ದಂಡನೆಗೆ ಗುರಿಪಡಿಸಬಹುದಾದ ಪ್ರಕರಣಗಳಿಗೆ ಗೊತ್ತುಪಡಿಸಿರುವ ಕಾರ್ಯವಿಧಾನಗಳಡಿಯಲ್ಲಿ ಶಿಸ್ತು ಕ್ರಮಕ್ಕೆ ಗುರಿಪಡಿಸಲು ಮಾನ್ಯ ಉಪ ಲೋಕಾಯುಕ್ತರು ಶಿಫಾರಸ್ಸು ಮಾಡಿದ ಮೇರೆಗೆ, ಮೇಲೆ (1)ರಲ್ಲಿ ಓದಲಾದ ಸರ್ಕಾರ ಆದೇಶ ದಿನಾಂಕ:14.06.2002ರಲ್ಲಿ ಸದರಿ ಅಧಿಕಾರಿಯ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 14-ಎ ಅಡಿಯಲ್ಲಿ ಮಾನ್ಯ ಉಪ ಲೋಕಾಯುಕ್ತರಿಂದ ಇಲಾಖಾ ವಿಚಾರಣೆ ನಡೆಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪತ್ರ ದಿನಾಂಕ:01.12.2003ರಲ್ಲಿ ಮಾನ್ಯ ಲೋಕಾಯುಕ್ತರು ಸದರಿ ಪ್ರಕರಣದ ವಿಚಾರಣಾ ವರದಿಯನ್ನು ದಾಖಲೆಗಳೊಂದಿಗೆ ಕಳುಹಿಸಿ, ಆರೋಪಗಳು ಸಾಬೀತಾಗಿಲ್ಲವಾದ ಕಾರಣ ಆಪಾದಿತ ಅಧಿಕಾರಿಯನ್ನು ದೋಷಮುಕ್ತ ಗೊಳಿಸುವಂತೆ ಶಿಫಾರಸ್ಸು ಮಾಡಿದ್ದಾರೆ.

ಸರ್ಕಾರವು, ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಟಿ.ಸಿ. ವರದೇಗೌಡ, ಕೈಗಾರಿಕಾ ವಿಸ್ತರಣಾಧಿಕಾರಿ, ಇವರನ್ನು ದೋಷಮುಕ್ತಗೊಳಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ವಾಕೈ 62 ಕೈಸೇವಿ 2002, ಬೆಂಗಳೂರು ದಿನಾಂಕ:8ನೇ ಏಪ್ರಿಲ್, 2004**

ಪ್ರಸ್ತಾವನೆಯ ವಿವರಗಳ ಮೇರೆಗೆ ಸರ್ಕಾರವು ಶ್ರೀ ಟಿ.ಸಿ. ವರದೇಗೌಡ, ಕೈಗಾರಿಕಾ ವಿಸ್ತರಣಾಧಿಕಾರಿ, ತಾಲ್ಲೂಕು ಕೈಗಾರಿಕಾ ಕೇಂದ್ರ, ನಂಜನಗೂಡು, ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತರ ಮಾನ್ಯ ಉಪ ಲೋಕಾಯುಕ್ತರಿಗೆ ಸರ್ಕಾರದ ಆದೇಶ ಸಂಖ್ಯೆ:ವಾಕೈ 62 ಕೈಸೇವಿ 2002, ದಿನಾಂಕ:14.06.2002ರಲ್ಲಿ ವಹಿಸಿದ್ದ ಇಲಾಖಾ ವಿಚಾರಣೆಯಲ್ಲಿ ಇವರನ್ನು ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್.445 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಕೈಗಾರಿಕಾ ಸೇವೆಗಳು).

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ಸೂಚನೆ**

**ಸಂಖ್ಯೆ: ಸಂವ್ಯಶಾಇ 19 ಆಡಳಿತ 2004, ಬೆಂಗಳೂರು, ದಿನಾಂಕ: 2ನೇ ಏಪ್ರಿಲ್, 2004**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸುತ್ತೋಲೆ ಸಂಖ್ಯೆ:ಸಿಆಸುಇ 66 ಯೋಮಸ 2003, ದಿನಾಂಕ:11.03.2004 ರಲ್ಲಿ ಸೂಚಿಸಿರುವಂತೆ ಪ್ರತಿ ತಿಂಗಳ ಮೊದಲನೇ ಶನಿವಾರವನ್ನು ಸಾರ್ವಜನಿಕ ಕುಂದುಕೊರತೆ ಆಲಿಸುವ ದಿನವನ್ನಾಗಿ ಆಚರಿಸಲು ನಿಗದಿಪಡಿಸಿದೆ.

ಆದ್ದರಿಂದ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಗೆ ಸಂಬಂಧಿಸಿದಂತೆ, ಸಾರ್ವಜನಿಕ ಕುಂದು ಕೊರತೆಗಳನ್ನು ಪ್ರತಿ ತಿಂಗಳ ಮೊದಲನೇ ಶನಿವಾರದಂದು ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ, ಇವರು ಕೊಠಡಿ ಸಂಖ್ಯೆ:136ರಲ್ಲಿ ಮಧ್ಯಾಹ್ನ 3-30 ಘಂಟೆಯಿಂದ 4-30ರವರೆಗೆ ಆಲಿಸುವರು.

ಇದನ್ನು ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

**ಭಾ.ಭೀ. ಪತ್ತಾರ**

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ, ಹಾಗೂ
ಪಿ.ಆರ್.446 ಸಾರ್ವಜನಿಕ ದೂರು ನಿರ್ವಹಣಾಧಿಕಾರಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**LABOUR SECRETARIAT**

**Sub:** Stepping of Pay of Sri H. Srinivasaiah, Joint Director of Factories to that of his juniors-regarding.

**Read:** Letter No. EST-1/ABS/CR-05/2003-04 dated:19.02.2004 of the Director of Factories and Boilers.

**Preamble:**

Sri H. Srinivasaiah who is presently working as Joint Director of Factories had joined the Department of Factories and Boilers in the year 1978 along with four others namely Sri A.S. Sheshadri, Sri B.S. Ramachandra, Sri, Chikkanna and Sri Srinivasan, Sri H. Srinivasaiah is the senior most officer both in the select list of Karnataka State Public Service Commission and in the gradation list published by the Government from time to time. All of them had joined the service at the same period and were in the identical pay scale. As on 01.08.1981 they were drawing equal pay. While fixing the revised pay as per Karnataka Civil Service (Revised Pay) Rules-1982 w.e.f. 01.07.1982, the pay of junior officer were fixed at a pay of Rs. 1150/-(Rupees One Thousand One Hundred Fifty only), whereas the pay of Sri H. Srinivasaiah was fixed at a pay of Rs. 1100/- (Rupees One Thousand One Hundred only). Also two of his junior officers had availed the advantage of time bound advancement. This has resulted in disparity of pay scales, consequent to this the senior most officer namely Sri. H. Srinivasaiah is found drawing a lesser pay than that of his juniors.

Since a pay disparity had arisen for the reasons noted utsupra, he had made an appeal to the Government through the Director of Factories and Boilers with a request to set right the anomaly in his pay scale. The Director of Factories and Boilers vide letter under reference above has sent the proposal to the Government and also has recommended his case for stepping of pay at par with his juniors. The Director has submitted all the relevant documents and details including pay particulars received from Account General (A & E), Karnataka, Bangalore with a comparative statement showing the date of disparity in their pay scales. The disparity is found to be on 01.08.1982 and on 06.07.1998. They are attributable to wrong fixation of pay and the promotion of the senior as Deputy Chief Inspector of Factories prior to 01.04.1998 i.e. before revision of pay scale in the year 1999 respectively.

The proposal of the Director of Factories and Boilers has been carefully examined by the Government and a decision has been taken to set right the anomaly. Hence the following order.

**Government Order No.LD 11 KaBaSe 2004, Bangalore, Dated:8th April, 2004**

Government are pleased to accord sanction to step-up the pay of Sri H. Srinivasaiah, the then Inspector of Factories to that of his juniors from Rs. 1100/- to 1150/- in the pay scale of Rs. 920-1725 w.e.f. 01.08.1982 in accordance with the provisions of sub rule (6) of rule 8 of the Karnataka Civil Service (Revised Pay) Rules 1982 and to regulate his next increment as per rules 51 and 53 of Karnataka Civil Service Rules.

However, even after regulating his pay in accordance with rule 51 & 53 of Karnataka Civil Service Rules, if he is again found to be drawing pay lower than that of his juniors resulting in anomaly of pay scales, only under such circumstances the Government accords sanction to step-up his pay w.e.f. 06.07.1998 in the pay scale of Rs. 9580-14200 to that of his juniors in accordance with the provision of Rule 7(8) of Karnataka Civil Service (Revised Pay) Rules 1999 and allow consequential monitory benefits.

This order issues in concurrence with the Finance Department note No.FD 209 Exp.09/04 dated:01.04.2004.

By Order and in the name of the Governor of Karnataka,
**B.H. UMAPATHI**
Under Secretary to Government,
Labour Department (Factories & Boilers).

PR-447

**ಕಂದಾಯ ಸಚಿವಾಲಯ**

**ವಿಷಯ:** ದಾವಣಗೆರೆ ತಾಲ್ಲೂಕಿನ ಅಮರಗೊಳ್ಳ ಗ್ರಾಮದ ರಿ.ಸ. ನಂ:64:2ಪಿ ರಲ್ಲಿ 0.04 ಗುಂಟೆ ಹೆಚ್ಚುವರಿ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 77 (3)ರ ಅಡಿಯಲ್ಲಿ ಗ್ರಾಮ ಪಂಚಾಯಿತಿ ಕಟ್ಟಡ ಹಾಗೂ ಗ್ರಾಮ ಲೆಕ್ಕಿಗರ ಕಛೇರಿ, ಕಟ್ಟಡ ನಿರ್ಮಾಣಕ್ಕಾಗಿ ಸಾರ್ವಜನಿಕರ ಉದ್ದೇಶಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ರವರ ಪತ್ರ ಸಂಖ್ಯೆ:ಭೂಸು:ಸಿಆರ್:44:03-04 ದಿನಾಂಕ:29.10.2003.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ ರವರು ದಾವಣಗೆರೆ ತಾಲ್ಲೂಕು ಅಮರಗೊಳ್ಳ ಗ್ರಾಮದ ರಿ.ಸ. ನಂ: 64:2ಪಿ ರಲ್ಲಿನ 0.04 ಗುಂಟೆ ಹೆಚ್ಚುವರಿ ಜಮೀನನ್ನು ಅಮರಗೊಳ್ಳ ಗ್ರಾಮ ಪಂಚಾಯಿತಿ ಕಟ್ಟಡಕ್ಕೆ 0.02 ಗುಂಟೆ ಹಾಗೂ ಗ್ರಾಮ ಲೆಕ್ಕಿಗರ ವಸತಿ ಗೃಹ ಕಂ-ಕಛೇರಿ ಕಟ್ಟಡಕ್ಕೆ 0.02 ಗುಂಟೆ ಜಮೀನನ್ನು ಕಟ್ಟಡ ನಿರ್ಮಾಣ ಮಾಡಲು ಅನುವಾಗುವಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 77 (3)ರಡಿ ಸಾರ್ವಜನಿಕರ ಉದ್ದೇಶಕ್ಕಾಗಿ ಕಾಯ್ದಿರಿಸಿ ಮಂಜೂರು ಮಾಡಲು ಶಿಫಾರಸ್ಸು ಮಾಡಿದ್ದಾರೆ.

**ಆದೇಶ ಸಂಖ್ಯೆ:ಕಂಇ 134 ಎಲ್ಆರ್ಎಂ: 2003 ದಿನಾಂಕ:7ನೇ ಜನವರಿ, 2004**

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ದಾವಣಗೆರೆ ಜಿಲ್ಲೆ, ದಾವಣಗೆರೆ ತಾಲ್ಲೂಕಿನ ಅಮರಗೊಳ್ಳ ಗ್ರಾಮದ ರಿ. ಸರ್ವೆ ನಂ:64:2ಪಿ ರಲ್ಲಿನ 0.04 ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 77 (3)ರ ಅಡಿಯಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿ ಕಾಯ್ದಿರಿಸಿ, ಕರ್ನಾಟಕ ಭೂ ಸುಧಾರಣೆ ನಿಯಮಾವಳಿಗಳು, 1974ರ ನಿಯಮ 27ಎ ಅಡಿಯಲ್ಲಿ 0.02 ಗುಂಟೆ ಜಮೀನನ್ನು ಗ್ರಾಮ ಪಂಚಾಯಿತಿ ಕಟ್ಟಡ ನಿರ್ಮಾಣಕ್ಕೆ ಹಾಗೂ 0.02 ಗುಂಟೆ ಜಮೀನನ್ನು ಗ್ರಾಮ ಲೆಕ್ಕಿಗರ ವಸತಿ ಗೃಹ ಕಂ-ಕಛೇರಿ ಕಟ್ಟಡ ನಿರ್ಮಾಣಕ್ಕೆ ಮಂಜೂರು ಮಾಡಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸು).

ಪಿ.ಆರ್.448

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ:ಸಿಆಸುಇ 86 ಆಸೇವ 2003, ಬೆಂಗಳೂರು, ದಿನಾಂಕ:7ನೇ ಏಪ್ರಿಲ್, 2004**

ಶ್ರೀ ಕೆ. ಹೇಮಾಜಿ ನಾಯಕ್, ಇವರಿಗೆ ಅಧಿಸೂಚನೆ ಸಂಖ್ಯೆ: ಸಿಆಸುಇ 71 ಆಸೇವ 97 ದಿನಾಂಕ:27.10.1997ರಲ್ಲಿ ಕೆ.ಎ.ಎಸ್. ಕಿರಿಯ ಶ್ರೇಣಿ ವೃಂದದಿಂದ ಕೆ.ಎ.ಎಸ್. ಹಿರಿಯ ಶ್ರೇಣಿ ವೃಂದಕ್ಕೆ ಭವಿಷ್ಯವರ್ತಿ ದಿನಾಂಕದಿಂದ ಅನ್ವಯಿಸುವಂತೆ ನೀಡಲಾಗಿರುವ ಬಡ್ತಿಯನ್ನು ಕರ್ನಾಟಕ ನಾಗರೀಕ ಸೇವೆಗಳು (ಆರ್.ಪಿ.ಪಿ.ಪಿ.) ನಿಯಮಗಳು 1978ರ ನಿಯಮ 2 (1) (ಎ) ರನ್ವಯ ದಿನಾಂಕ:19.02.1996ರಿಂದಲೇ ಜಾರಿಗೆ ಬರುವಂತೆ ಪೂರ್ವಾನ್ವಯವಾಗಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್.450

**FOREST, ECOLOGY AND ENVIRONMENT SECRETARIAT**

**Subject:** Diversion of 3.85 ha of forest land for the purpose of construction of 110 KV DC Transmission line from 220 KV receiving station, Belgaum to 110 KVSC Ghataprabha line.

**Read:**
1. Letter No.A5(2)GFI.CR.17.BGM/99-2000, dated:15.3.2000 and 23-12-2003 of Principal Chief Conservator of Forests, Bangalore.
2. State Government letter No.FEE 40 FGL 2000, dated:20.6.2001 and 14.1.2004.
3. Letter No. F(C)A /11.2/ 216/ KAR/ TL/1591, dated 12.11.2001 and 10.2.2004 of Government of India, Ministry of Environment and Forests, Regional Office, (South Zone), Bangalore

**PREAMBLE:**

The Principal Chief Conservator of Forests, Bangalore vide his letter dated 15-3-2000 read at (1) above has submitted a proposal to State Government for diversion of an area 3.85 ha. of forest land in Belgaum reserve forest under Forest (Conservation) Act 1980, for construction of 110 KV DC transmission line from 220 KV receiving station Belgaum to 110 KV S/c Ghataprabha line in Belgaum Division in favour of Karnataka Power Transmission Corporation Limited, Belgaum.

Accordingly, the proposal was recommended to Government of India for approval under section (2) of Forest (Conservation) Act 1980 vide State Government letter dated: 20.6.2001 read at (2) above

The Government of India, Ministry of Environment and Forests, Regional Office, (South Zone), Bangalore has agreed to the proposal in principle (Stage-I) vide their letter dated 12.11.2001 read at (3) above subject to certain conditions.

The compliance report on the condition has been sent to Government of India vide State Government letter dated 14.1.2004 read at (2) above.

The Government of India, Ministry of Environment and Forests, Regional Office, (South Zone), Bangalore in their letter dated: 10-2-2004 read at (3) above has conveyed its final approval (Stage-II) in accordance with Section 2 of Forest(Conservation)Act,1980 for the diversion of 3.85 ha. of forest land in F.Sy.No.175 of Basavankolla(v) F.S.No.60 of Kanbargi(v) and F.Sy.No.207 of Kalkamba(v) in Belgaum Forest Division for construction of 110 KV DC transmission line from 220 KV receiving Station, Belgaum to 110 KV SC Ghataprabha line in favour of Karnataka Power Transmission Corporation Ltd., Belgaum with certain conditions.

The proposal has been examined in the light of the final approval given by the Government of India and the following orders are issued.

**GOVERNMENT OREDER NO. FEE 104 FGL 2000, BANGALORE, DATED: 23rd April, 2004**

After careful consideration of the proposal and under the circumstances explained in the preamble Government are pleased to accord approval under section (2) of Forest (Conservation) Act 1980 for diversion of 3.85 ha. of forest land in F.Sy.No.175 of of Basavankolla(v) F.S.No.60 of Kanbargi(v) and F.Sy.No.207 of Kalkamba(v) in Belgaum Forest Division for the purpose of construction of 110 KV DC transmission line from 220 KV receiving Station, Belgaum to 110 KV SC Ghataprabha line in favour of Karnataka Power Transmission Corporation Ltd., Belgaum subject to the following conditions.

1. The legal status of forest land shall remain unchanged.
2. The Compensatory afforestation shall be raised over 3.90 ha. of identified non-forest land at the cost of user agency.
3. The mutated forest land be declared as protected forest/reserved forests within 6 months and the forest land shall be handed over to user agency after declaring it as a notified forest under Indian Forest Act.
4. The total forest area utilized for the project shall not exceed 3.85 ha.
5. The felling of trees in forest area for the project shall be regulated in accordance with the instructions contained in Annexure V of the guidelines issued under the Act.
6. This shall be treated as a perpetual lease and the total forest area utilized for is not used for the stipulated purpose or when it no longer needed for the stipulated purpose the area should automatically revert back to the Forest Department.
7. The lessee has to pay the lease rent fixed by the Government from time to time.
8. The cost of extraction of tree growth as calculated by the Department shall be paid by the user agency.

By Order and in the name of the Governor of Karnataka,
**S.R. VATSALA**
Under Secretary to Government,
Forest, Ecology and Environment Department.

PR-459

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯದಲ್ಲಿ ಎಲೆಕ್ಟ್ರೋ ಹೋಮಿಯೋಪತಿ ವೈದ್ಯ ಪದ್ಧತಿಯಲ್ಲಿ ವ್ಯಾಸಂಗ ಮಾಡಿ ವೃತ್ತಿನಿರತರಾಗಿರುವ ಅಭ್ಯರ್ಥಿಗಳಿಗೆ ವೃತ್ತಿಯನ್ನು ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**

1. ಅಧ್ಯಕ್ಷರು, ಕರ್ನಾಟಕ ರಾಜ್ಯ ಎಲೆಕ್ಟ್ರೋ ಹೋಮಿಯೋಪತಿ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್ ಅಸೋಸಿಯೇಷನ್ (ರಿ), ಧಾರವಾಡ ಇವರ ಮನವಿ ದಿನಾಂಕ:15.10.2003.
2. ಸರ್ಕಾರಿ ಪತ್ರ ಸಂಖ್ಯೆ: ಆಕುಕ 299 ಪಿಟಿಡಿ 2003, ದಿನಾಂಕ:23.12.2003.
3. ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ: ಭಾವೈಪ/ 30/ ನಿಅವಿ/ 2002-04, ದಿನಾಂಕ:17.11.2003 ಮತ್ತು ದಿನಾಂಕ:06.02.2004.
4. ಜಂಟಿ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಭಾರತ ಸರ್ಕಾರ ಇವರ ಪತ್ರ ಸಂಖ್ಯೆ: ಆರ್. 14015/25/96/ ಯು ಅಂಡ್ ಹೆಚ್. (ಆರ್) (ಪಿಟಿ), ದಿನಾಂಕ:25.11.2003.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಎಲೆಕ್ಟ್ರೋ ಹೋಮಿಯೋಪತಿ ಸಂಶೋಧನಾ ಮತ್ತು ಅಭಿವೃದ್ಧಿ ಸಂಘವು, ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಪತ್ರದಲ್ಲಿ 1992 ರಿಂದ 1998ರ ಅವಧಿಯಲ್ಲಿ ಎಲೆಕ್ಟ್ರೋ ಹೋಮಿಯೋಪತಿ ವೈದ್ಯ ಪದ್ಧತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿ ವೃತ್ತಿನಿರತರಾಗಿರುವ ಅಭ್ಯರ್ಥಿಗಳಿಗೆ ಎಲೆಕ್ಟ್ರೋ ಹೋಮಿಯೋಪತಿ ವೈದ್ಯ ಪದ್ಧತಿಯಲ್ಲಿ ವೃತ್ತಿ ನಡೆಸಲು ಅನುಮತಿಯನ್ನು ನೀಡಬೇಕೆಂದು ಸ್ವ-ವಿವರವಾದ ಬೇಡಿಕೆಯ ಮನವಿಯನ್ನು ಸಲ್ಲಿಸಿರುತ್ತಾರೆ. ಈ ಬಗ್ಗೆ ನ್ಯಾಯಾಲಯದ ತೀರ್ಪಿನ ಅನುಗುಣವಾಗಿ ಹಾಗೂ ಕೇಂದ್ರ ಸರ್ಕಾರದ ಮಾರ್ಗದರ್ಶನದ ಅನುಗುಣವಾಗಿ ಪರಿಶೀಲಿಸಿ, ಅಭ್ಯರ್ಥಿಗಳ ವಿವರ ಹಾಗೂ ದಾಖಲೆ ಪಟ್ಟಿಯನ್ನು ಪಡೆದು ವರದಿಯನ್ನು ಸಲ್ಲಿಸಬೇಕೆಂದು ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ ಇವರನ್ನು ಕೋರಲಾಗಿತ್ತು.

ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ತಮ್ಮ ಪತ್ರದಲ್ಲಿ, 1992-93 ನೇ ಶೈಕ್ಷಣಿಕ ವರ್ಷದಲ್ಲಿ ಕರ್ನಾಟಕ ರಾಜ್ಯದಲ್ಲಿ ಎಲೆಕ್ಟ್ರೋ ಹೋಮಿಯೋಪತಿ ವೈದ್ಯಕೀಯ ಕೋರ್ಸನ್ನು (ಬಿಇಎಂಎಸ್) ನಡೆಸುವಂತಹ ಹಲವಾರು ಸಂಸ್ಥೆಗಳು ಸರ್ಕಾರದ ಮನ್ನಣೆ ಇಲ್ಲದೆ ಪ್ರಾರಂಭಗೊಂಡು, ಕಾರ್ಯನಿರ್ವಹಿಸಿ ಇಂತಹ ಸಂಸ್ಥೆಗಳಲ್ಲಿ ಹಲವಾರು ವಿದ್ಯಾರ್ಥಿಗಳು ಎಲೆಕ್ಟ್ರೋ ಹೋಮಿಯೋಪತಿ ವೈದ್ಯ ಪದ್ಧತಿಯಲ್ಲಿ ವ್ಯಾಸಂಗ ಮಾಡಿರುವುದು ಕಂಡು ಬಂದಿದೆ ಎಂದು ತಿಳಿಸಿದ್ದಾರೆ. ನಿರ್ದೇಶನಾಲಯದ ಅಡಿಯಲ್ಲಿ ಕೆಲಸ ಮಾಡುತ್ತಿರುವ ಆಯುರ್ವೇದ ಮತ್ತು ಯುನಾನಿ ವೃತ್ತಿ ನೋಂದಣಾ ಮಂಡಳಿಯ ನೋಂದಣಾಧಿಕಾರಿಗಳ ಅಧಿಕೃತ ಗಮನಕ್ಕೆ ಬಂದ ನಂತರ ಈ ಮೇಲೆ ತಿಳಿಸಿದ ಎಲೆಕ್ಟ್ರೋ ಹೋಮಿಯೋಪತಿ ಪದವಿ ನಡೆಸುತ್ತಿದ್ದ ಕಾಲೇಜುಗಳ ವಿರುದ್ಧ ಕ್ರಮ ಜರುಗಿಸಲು ಮುಂದಾದಾಗ, ಕಾಲೇಜುಗಳನ್ನು ನಡೆಸುತ್ತಿದ್ದ ಸಂಸ್ಥೆಗಳು, ಕರ್ನಾಟಕ ರಾಜ್ಯದ ಮಾನ್ಯ ಉಚ್ಚನ್ಯಾಯಾಲಯದ ಅರ್ಜಿ ಸಂಖ್ಯೆ: ಡಬ್ಲ್ಯೂಪಿ 15339 ರಿಂದ 45/1994 (ಶಿಕ್ಷಣ)ರಲ್ಲಿ ತಡೆಯಾಜ್ಞೆ ಪಡೆದಿದ್ದು, ಈ ತಡೆಯಾಜ್ಞೆಯು ಮಾನ್ಯ ಉಚ್ಚ ನ್ಯಾಯಾಲಯದಿಂದ ವಜಾ ಆದ ನಂತರ ನಿಯಮಾನುಸಾರ ಕ್ರಮವನ್ನು ಜರುಗಿಸಿ ಸದರಿ ಸಂಸ್ಥೆಗಳನ್ನು ಮುಚ್ಚಲಾಗಿದೆ.

ಈ ಬಗ್ಗೆ ಕೇಂದ್ರ ಸರ್ಕಾರವು, ತನ್ನ ಆದೇಶದಲ್ಲಿ ಉಲ್ಲೇಖಿಸಿ ಎಲೆಕ್ಟ್ರೋ ಹೋಮಿಯೋಪತಿ ವೈದ್ಯ ಪದ್ಧತಿಗೆ ಈ ಬೆಳವಣಿಗೆ ಹಂತದಲ್ಲಿ, ಮನ್ನಣೆ ನೀಡಲು ಸಾಧ್ಯಾಸಾಧ್ಯತೆಯನ್ನು ಪರಿಶೀಲಿಸಲು ಡೈರೆಕ್ಟರ್ ಜನರಲ್ ಆಫ್ ಹೆಲ್ತ್ ಸೈನ್ಸ್ ನಿರ್ಮಾಣ ಭವನ, ನವದೆಹಲಿ ಇವರಿಗೆ ವರದಿಯನ್ನು ನೀಡಲು ತಿಳಿಸಿತ್ತು. ಈ ನಿಟ್ಟಿನಲ್ಲಿ ಡೈರೆಕ್ಟರ್ ಜನರಲ್ ಆಫ್ ಹೆಲ್ತ್ ಸೈನ್ಸ್‌ರವರು ಈ ಪದ್ಧತಿಯು ಇನ್ನೂ ಬೆಳವಣಿಗೆ ಹಂತದಲ್ಲಿದ್ದು ಇದನ್ನು ಪ್ರತ್ಯೇಕ ಶಾಸ್ತ್ರವೆಂದು ಪರಿಗಣಿಸಲು ಸಾಧ್ಯವಿಲ್ಲವೆಂದು, ಆದರೆ ಈ ಎಲೆಕ್ಟ್ರೋ ಹೋಮಿಯೋಪತಿ ವಿಷಯವನ್ನು ದೇಶದಲ್ಲಿನ ಎಲ್ಲಾ ಹೋಮಿಯೋಪತಿ ಕಾಲೇಜುಗಳಲ್ಲಿ ಒಂದು ವಿಷಯವನ್ನಾಗಿ ಭೋದಿಸಲು ಯೋಗ್ಯವಾಗಿದ್ದು, ಇದರಿಂದ ಸಾರ್ವಜನಿಕರಿಗೆ ಹೆಚ್ಚು ಲಾಭದಾಯಕವಾಗಿರುವುದರಿಂದ ಇದನ್ನು ಪಠ್ಯಕ್ರಮದಲ್ಲಿ ಸೇರಿಸಲು ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ ಮಾನ್ಯ ಉಚ್ಚ ನ್ಯಾಯಾಲಯ, ದೆಹಲಿ ತೀರ್ಪಿನ ಸಂಖ್ಯೆ: CW/4015/96 ಮತ್ತು CW/8468/97 ರಲ್ಲಿ ನ್ಯಾಯಾಲಯವು ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ನಿಯಮಗಳನ್ನು ರಚಿಸುವ ಬಗ್ಗೆ ಮತ್ತು ಲೈಸನ್ಸ್ ನೀಡುವ ಬಗ್ಗೆ ಮತ್ತು ಇನ್ನಿತರ ವಿಷಯಗಳ ಬಗ್ಗೆ ಆದೇಶಿಸಿದೆ. ದೆಹಲಿಯ ಉಚ್ಚನ್ಯಾಯಾಲಯದ ಆದೇಶವನ್ನು ಮಾನ್ಯ ಸರ್ವೋಚ್ಚ ನ್ಯಾಯಾಲಯವು ಲೀವ್ ಅಪೀಲು (ಸಿವಿಲ್) ಸಂಖ್ಯೆ: 11262/2000, ದಿನಾಂಕ:18.11.98ರಲ್ಲಿ ಎತ್ತಿ ಹಿಡಿದಿದೆ.

ಈ ಹಿನ್ನೆಲೆಯಲ್ಲಿ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರು ಶ್ರೀಸಾಮಾನ್ಯರಿಗೆ ಯಾವುದೇ ರೀತಿಯಲ್ಲಿ ಹಾನಿಯಾಗದಂತೆ ಎಲೆಕ್ಟ್ರೋ ಹೋಮಿಯೋಪತಿಯಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳು ಔಷಧೋಪಚಾರವನ್ನು ಮಾಡಲು ಅನುಮತಿ ನೀಡಬಹುದೆಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಕೇಂದ್ರ ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಸುತ್ತೋಲೆಯಲ್ಲಿ ಇಂತಹ ಎಲೆಕ್ಟ್ರೋ ಹೋಮಿಯೋಪತಿ ವೈದ್ಯ ಪದ್ಧತಿ ಕೋರ್ಸನ್ನು ಮಾನ್ಯತೆ ಮಾಡಿರುವುದಿಲ್ಲವೆಂದು, ಸರ್ಕಾರದಿಂದ ಮನ್ನಣೆ ಪಡೆದ ವೈದ್ಯ ಪದ್ಧತಿಯಲ್ಲಿ ವೃತ್ತಿ ನಡೆಸುವವರು ಮಾತ್ರ "ವೈದ್ಯ" ಎಂಬ ಪದನಾಮವನ್ನು ಬಳಸಬೇಕೆಂದು ಆದೇಶ ನೀಡಿದೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 299 ಪಿಟಿಡಿ 2003, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ, 2004**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ ಹಾಗೂ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ ಇವರ ಶಿಫಾರಸ್ಸಿನ ಅನುಗುಣವಾಗಿ ಎಲೆಕ್ಟ್ರೋ ಹೋಮಿಯೋಪತಿ ವೈದ್ಯ ಪದ್ಧತಿಯಲ್ಲಿ ಕಾರ್ಯ ನಿರ್ವಹಿಸಿದ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿ ಖಾಸಗಿ ವೃತ್ತಿಯನ್ನು ಪ್ರಾರಂಭಿಸಿರುವ ಎಲೆಕ್ಟ್ರೋ ಹೋಮಿಯೋಪತಿ ಅಭ್ಯರ್ಥಿಗಳು ಜನಸಾಮಾನ್ಯರಿಗೆ ಯಾವುದೇ ರೀತಿಯಲ್ಲಿ ಹಾನಿಯಾಗದಂತೆ ಮತ್ತು ಇನ್ನು ಮುಂದೆ ಸಂಸ್ಥೆಗಳು ಇಂತಹ ಯಾವುದೇ ಹೊಸ ಎಲೆಕ್ಟ್ರೋ ಹೋಮಿಯೋಪತಿ ವೃತ್ತಿ ತರಗತಿಯನ್ನು ಪ್ರಾರಂಭಿಸಬಾರದೆಂಬ ಷರತ್ತನ್ನು ವಿಧಿಸುತ್ತಾ ಕಾರ್ಯನಿರತರಾಗಿರುವ ಎಲೆಕ್ಟ್ರೋ ಹೋಮಿಯೋಪತಿ ಅಭ್ಯರ್ಥಿಗಳಿಗೆ ಈ ಕೆಳಗಿನ ಷರತ್ತುಗಳಿಗೆ ಒಳಪಟ್ಟು ಎಲೆಕ್ಟ್ರೋ ಹೋಮಿಯೋಪತಿ ಔಷಧೋಪಚಾರ ಮಾಡಲು ಸರ್ಕಾರದ ಅನುಮತಿಯನ್ನು ನೀಡಲು ನಿರ್ದೇಶಕರಿಗೆ ಸೂಚಿಸಿದೆ.

1. ಈ ಅನುಮತಿಯು ಸರ್ಕಾರದಿಂದ ಮಾನ್ಯತೆ ಅಥವಾ ನೋಂದಣಿ ಆಗಿದೆ ಎಂದು ಭಾವಿಸುವಂತಿಲ್ಲ, ಮತ್ತು ಕೋರ್ಸಿಗೆ ಮಾನ್ಯತೆ ನೀಡಲಾಗುವುದಿಲ್ಲ.
2. ಎಲೆಕ್ಟ್ರೋ ಹೋಮಿಯೋಪತಿ ವೈದ್ಯ ಪದ್ಧತಿಯಲ್ಲಿ ಕಾರ್ಯನಿರ್ವಹಿಸಿದ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿದ ಎಲ್ಲಾ ಅಭ್ಯರ್ಥಿಗಳ ಪಟ್ಟಿಯನ್ನು ಅರ್ಜಿದಾರರು ದಾಖಲೆಗಳ ಸಮೇತ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ ಇವರಿಗೆ ಸಲ್ಲಿಸತಕ್ಕದ್ದು.
3. ನಿರ್ದೇಶಕರು ಸೂಚಿಸಿದ ಮಾದರಿಯಲ್ಲಿ ಅಭ್ಯರ್ಥಿಗಳ ಪಟ್ಟಿ ತಯಾರಿಸಿ 6 ತಿಂಗಳ ಒಳಗಾಗಿ ಸಲ್ಲಿಸತಕ್ಕದ್ದು.
4. ನೋಂದಾಯಿತ ರಾಜ್ಯಮಟ್ಟದ ಸಂಘಟನೆಯಾದ ಸಂಸ್ಥೆಯಿಂದ ಅರ್ಜಿದಾರರು ಸಲ್ಲಿಸಿದ ಅಭ್ಯರ್ಥಿಗಳ ಪಟ್ಟಿಯನ್ನು ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯದ ಅಭಿವೃದ್ಧಿ ವಿಭಾಗದಲ್ಲಿ ಕಾಯ್ದಿರಿಸತಕ್ಕದ್ದು.
5. ನಿರ್ದೇಶಕರು ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳಿಗೆ ಎಲೆಕ್ಟ್ರೋ ಹೋಮಿಯೋಪತಿ ವೈದ್ಯ ಪದ್ಧತಿಯಲ್ಲಿ ವೃತ್ತಿ ಕೈಗೊಳ್ಳಲು ಅನುಮತಿ ನೀಡಿದ ಕುರಿತು, ಪ್ರಮಾಣ ಪತ್ರ ವಿತರಿಸತಕ್ಕದ್ದು.
6. ಕೇಂದ್ರ ಸರ್ಕಾರದಿಂದಾಗಲೀ: ರಾಜ್ಯ ಸರ್ಕಾರದಿಂದಾಗಲೀ ಯಾವುದೇ ಸಹಾಯಧನ ನೀಡಲಾಗುವುದಿಲ್ಲ.
7. ಈ ವೃತ್ತಿಯಲ್ಲಿ ಕಾರ್ಯ ನಿರ್ವಹಿಸುವವರು, ವೈದ್ಯರೆಂದು ಪದನಾಮ ಬಳಸುವಂತಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚೋಮಾನಾಯಕ್ ಜಿ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್.464